**ಕರ್ನಾಟಕ ವಿಧಾನ ಪರಿಷತ್ತು**
**146 ನೇ ಅಧಿವೇಶನ 2022**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1924
ಮಾನ್ಯ ಸದಸ್ಯರ ಹೆಸರು : ಶ್ರೀ. ಸೂರಜ್ ರೇವಣ್ಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 16-03-2022
ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ಯಾವ ಯಾವ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಬಹುದು; (ಸಂಪೂರ್ಣ ಮಾಹಿತಿ ನೀಡುವುದು) | ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ರಸ್ತೆ ಸುರಕ್ಷತಾ ಕಾಮಗಾರಿಗಳನ್ನು ಕೈಗೊಳ್ಳುತ್ತಿದ್ದು, ಈ ಕಾಮಗಾರಿಗಳಲ್ಲಿ ರಸ್ತೆ ಸುರಕ್ಷತಾ ಆಡಿಟ್ ಮಾಡಿರುವ ವರದಿಗಳನ್ನು ಹಾಗೂ ಪೋಲೀಸ್, ಸಾರಿಗೆ ಇಲಾಖೆಯಿಂದ ಗುರುತಿಸಲ್ಪಟ್ಟಿರುವ ಕಪ್ಪು ಸ್ಥಳಗಳನ್ನು (Black spots) ನಿವಾರಿಸಿ ರಸ್ತೆಯ ಜಾಮಿತಿಯನ್ನು ಅಭಿವೃದ್ಧಿಗೊಳಿಸಿ ರಸ್ತೆ ಸುರಕ್ಷತಾ ಪೀಠೋಪಕರಣಗಳನ್ನು ಅಳವಡಿಸಲಾಗುವುದು. ಪಾದಚಾರಿಗಳ ಸುಗಮ ಸಂಚಾರಕ್ಕೆ ಅನುಕೂಲವಾಗುವಂತೆ ರಸ್ತೆಯ ಇಕ್ಕೆಲಗಳನ್ನು ಹಾಗೂ ಕ್ಯಾರೇಜ್ ವೇ ಅಭಿವೃದ್ಧಿಗೊಳಿಸಲಾಗುವುದು. |
| ಆ) | ಹಾಸನ ಜಿಲ್ಲೆಯಲ್ಲಿ 2020-2021 ಮತ್ತು 2021-22ನೇ ಸಾಲಿನಲ್ಲಿ ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ಕೈಗೊಂಡಿರುವ ಕಾಮಗಾರಿಗಳು ಯಾವುವು; (ಸಂಪೂರ್ಣ ಮಾಹಿತಿಯನ್ನು ವಿಧಾನಸಭಾ ಕ್ಷೇತ್ರವಾರು, ವರ್ಷವಾರು ಮತ್ತು ಕಾಮಗಾರಿಗಳವಾರು ನೀಡುವುದು) | ಹಾಸನ ಜಿಲ್ಲೆಯಲ್ಲಿ 2020-2021 ಮತ್ತು 2021-22ನೇ ಸಾಲಿನಲ್ಲಿ ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ಕೈಗೊಂಡಿರುವ ಕಾಮಗಾರಿಗಳ ವಿಧಾನಸಭಾ ಕ್ಷೇತ್ರವಾರು, ಲೆಕ್ಕ ಶೀರ್ಷಿಕೆವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ) | ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ರಾಜ್ಯ ಹೆದ್ದಾರಿಯ ಅಕ್ಕ-ಪಕ್ಕದಲ್ಲಿರುವ ಫುಟ್‌ಪಾತ್‌ನಲ್ಲಿ ಫುಡ್‌ಕೋರ್ಟ್‌ಗಳನ್ನು (ಆಹಾರ ಕೇಂದ್ರ) ನಿರ್ಮಿಸಲು ಅವಕಾಶವಿದೆಯೇ ಹಾಗೂ ಸೌಂದರ್ಯೀಕರಣಕ್ಕೆ ಅನುದಾನ ನೀಡಬಹುದೇ; ಹಾಗಿದ್ದಲ್ಲಿ, ಹಾಸನ ಜಿಲ್ಲೆಯಲ್ಲಿ 2020-21 ಮತ್ತು 2021-22ನೇ ಸಾಲಿನಲ್ಲಿ ಕೈಗೊಂಡಿರುವ ಫುಡ್‌ಕೋರ್ಟ್‌ಗಳ (ಆಹಾರ ಕೇಂದ್ರ ಕಾಮಗಾರಿಗಳವಾರು, ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು); | ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ರಾಜ್ಯ ಹೆದ್ದಾರಿಯ ಅಕ್ಕ-ಪಕ್ಕದಲ್ಲಿರುವ ಫುಟ್‌ಪಾತ್‌ನಲ್ಲಿ ಫುಡ್‌ಕೋರ್ಟ್‌ಗಳನ್ನು (ಆಹಾರ ಕೇಂದ್ರ) ನಿರ್ಮಿಸಲು ಅವಕಾಶವಿರುವುದಿಲ್ಲ ಹಾಗೂ ಸೌಂದರ್ಯೀಕರಣಕ್ಕೆ ಅನುದಾನ ನೀಡಲಾಗಿರುವುದಿಲ್ಲ.<br><br>ಹಾಸನ ಜಿಲ್ಲೆಯಲ್ಲಿ ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರ ವತಿಯಿಂದ ಯಾವುದೇ ಫುಡ್‌ಕೋರ್ಟ್‌ಗಳ (ಆಹಾರ ಕೇಂದ್ರ) ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. |

| | | |
|---|---|---|
| ಈ) | ಹಾಸನ ಜಿಲ್ಲೆಯಲ್ಲಿ ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ರಾಜ್ಯ ಹೆದ್ದಾರಿಯ ಅಕ್ಕ-ಪಕ್ಕದಲ್ಲಿರುವ ಫುಟ್‌ಪಾತ್ ನಲ್ಲಿ ಫುಡ್ ಕೋರ್ಟ್‌ಗಳನ್ನು (ಆಹಾರ ಕೇಂದ್ರ) ನಿರ್ಮಿಸಿರುವುದರಿಂದ ಪಾದಚಾರಿಗಳ ಸುಗಮ ಓಡಾಟಕ್ಕೆ ತೊಂದರೆಯಾಗಿ, ಹೆಚ್ಚು ಅಪಘಾತಗಳು ಸಂಭವಿಸುವ ಬಗ್ಗೆ ಇಲಾಖೆಯಿಂದ ಅಧ್ಯಯನ ಕೈಗೊಳ್ಳಲಾಗಿದೆಯೇ; ಅಧ್ಯಯನ ಕೈಗೊಂಡಿದ್ದಲ್ಲಿ ಅಧ್ಯಯನದ ವರದಿಯನ್ನು ನೀಡುವುದು: | ರಾಜ್ಯ ಹೆದ್ದಾರಿಯ ಅಕ್ಕ-ಪಕ್ಕದಲ್ಲಿರುವ ಫುಟ್‌ಪಾತ್ ನಲ್ಲಿ ಫುಡ್‌ಕೋರ್ಟ್‌ಗಳನ್ನು (ಆಹಾರ ಕೇಂದ್ರ) ನಿರ್ಮಿಸಿರುವುದರಿಂದ ಪಾದಚಾರಿಗಳ ಸುಗಮ ಓಡಾಟಕ್ಕೆ ತೊಂದರೆಯಾಗಿ ಹೆಚ್ಚು ಅಪಘಾತಗಳು ಸಂಭವಿಸಿರುವ ಬಗ್ಗೆ ಯಾವುದೇ ಮಾಹಿತಿಯು ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದಲ್ಲಿ ಸ್ವೀಕೃತಿಯಾಗಿರುವುದಿಲ್ಲ. ಆದ್ದರಿಂದ ಯಾವುದೇ ಅಧ್ಯಯನ ಕೈಗೊಂಡಿರುವುದಿಲ್ಲ. |

ಸಂಖ್ಯೆ: ಲೋಇ E-101 ಇಎಪಿ 2022

(ಸಿ.ಸಿ. ಪಾಟೀಲ್)
ಲೋಕೋಪಯೋಗಿ ಸಚಿವರು

ವಿಧಾನ ಪರಿಷತ್ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 1699 (1924) ರ ಲಗತ್ತು ಅನುಬಂಧ

ಹಾಸನ ಜಿಲ್ಲೆಯಲ್ಲಿ 2020-21 ಮತ್ತು 2021-22ನೇ ಸಾಲಿನಲ್ಲಿ ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರದ ವತಿಯಿಂದ ಕೈಗೊಂಡಿರುವ ಕಾಮಗಾರಿಗಳ ವಿವರ

| Sl. No. | District | Taluk/ Constituency | Category of Road | Name of the work | Estimated Cost (Rs in Lakhs) | Remarks |
|---|---|---|---|---|---|---|
| 1 | 2 | 3 | 4 | 5 | 6 | 7 |
| | 2020-21ನೇ ಸಾಲಿನ ಲೆಕ್ಕ ಶೀರ್ಷಿಕೆ 3054-03-337-0-07-200 ರಾಜ್ಯ ಹೆದ್ದಾರಿ ರಸ್ತೆ ಸುರಕ್ಷತಾ ಕಾಮಗಾರಿ ನಿರ್ವಹಣಾ ವೆಚ್ಚ | | | | | |
| 01 | Hassan | Arasikere | SH | Rectification of Blackspot on Highway connecting Huliyar-Keralapura road (SH-102) near Ayyappa Swamy Temple | 85.31 | ಕಾಮಗಾರಿ ಪ್ರಗತಿಯಲ್ಲಿದೆ |
| | 2021-22ನೇ ಸಾಲಿನ ಲೆಕ್ಕ ಶೀರ್ಷಿಕೆ 3054-03-337-0-07-200 ರಾಜ್ಯ ಹೆದ್ದಾರಿ ರಸ್ತೆ ಸುರಕ್ಷತಾ ಕಾಮಗಾರಿ ನಿರ್ವಹಣಾ ವೆಚ್ಚ | | | | | |
| 01 | Hassan | Hassan | SH | Road safety works on Highway connecting Tiptur with Hassan via Dudda (SH 71) Road from KM 54.45 to 56.87 in Hassan Taluk Hassan District | 400.00 | ಕಾಮಗಾರಿ ಪ್ರಗತಿಯಲ್ಲಿದೆ |
| 02 | Hassan | Hassan | SH | Road safety works on Highway connecting Tiptur with Hassan via Dudda (SH 71) Road from KM 49.00 to 52.00 in Hassan Taluk Hassan District | 400.00 | ಕಾಮಗಾರಿ ಪ್ರಗತಿಯಲ್ಲಿದೆ |
| 03 | Hassan | Channaraya-pattana | SH | Road safety works on Highway connecting Srirangapatna with Arasikere road (SH-07) from KM 83.00 to 87.50 KM (Mudanahalli-Mallenahalli) at 79.50 KM near Byadarahalli gate and at 77.00 KM near Madabagate in Channarayapattana Taluk, Hassan District. | 170.00 | ಕಾಮಗಾರಿ ಪ್ರಗತಿಯಲ್ಲಿದೆ |
| | 2021-22ನೇ ಸಾಲಿನ ಲೆಕ್ಕ ಶೀರ್ಷಿಕೆ 3054-04-337-1-13-200 ಜಿಲ್ಲಾ ಮುಖ್ಯ ರಸ್ತೆ – ರಸ್ತೆ ಸುರಕ್ಷತಾ ಕಾಮಗಾರಿ ನಿರ್ವಹಣಾ ವೆಚ್ಚ | | | | | |
| 01 | Hassan | Channaraya-pattana | MDR | Road safety works on Mosalehosahalli – Bindiganavile road at KM 55.00 and at 44.40 KM near Akkanahallikudu village limit in Channarayapattana Taluk, Hassan District. | 70.00 | ಕಾಮಗಾರಿ ಪ್ರಗತಿಯಲ್ಲಿದೆ |
| 02 | Hassan | Hassan | MDR | Road safety works on Halebidu to Anechoukur Road from KM 28.45 to 30.50 KM near Santhepete Circle and Saraswati Temple Junction in Hassan Taluk Hassan District | 400.00 | ಕಾಮಗಾರಿ ಪ್ರಗತಿಯಲ್ಲಿದೆ |

| 1 | 2 | 3 | 4 | 5 | 6 | 7 |
|---|---|---|---|---|---|---|
| 03 | Hassan | Hassan | MDR | Road safety works on N.H 48 B.M road to Join N.S road from KM 0.00 to 7.00 KM near Dairy Circle in Hassan Taluk Hassan District | 400.00 | ಕಾಮಗಾರಿ ಪ್ರಗತಿಯಲ್ಲಿದೆ |
| 04 | Hassan | Channaraya-pattana | MDR | Road safety works on Gandasi Santhe Maidana – Nonavinakere road at KM 61.85 near Hosahalli village Limit, at 61.20 KM near Pura gate and at 62.50 KM near Narihalli Village Limit in Channarayapattana Taluk, Hassan District. | 90.00 | ಕಾಮಗಾರಿ ಪ್ರಗತಿಯಲ್ಲಿದೆ |

ಪ್ರಧಾನ ಇಂಜಿನಿಯರ್,
ಯೋಜನೆ ಮತ್ತು ರಸ್ತೆಗಳ ಆಸ್ತಿ ನಿರ್ವಹಣಾ ಕೇಂದ್ರ,
ಲೋಕೋಪಯೋಗಿ ಇಲಾಖೆ, ಬೆಂಗಳೂರು